# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1378 |
| ಸದಸ್ಯರ ಹೆಸರು | ಶ್ರೀ ಶಶಿಲ್ ಜಿ ನಮೋಶಿ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 09.03.2022 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಹೊಸ ತಾಲ್ಲೂಕುಗಳ ರಚನೆಯಾಗಿ ಅಧಿಕೃತವಾಗಿ ಉದ್ಘಾಟನೆಗೊಂಡ ತಾಲ್ಲೂಕು ಕಛೇರಿಗಳು ಪ್ರಾರಂಭವಾಗಿವೆಯೇ; ಮತ್ತು ತಾಲ್ಲೂಕು ಪಂಚಾಯಿತಿಗಳು ಪುನರ್ ನಿರ್ಮಾಣವಾಗಿವೆಯೇ; (ವಿವರ ನೀಡುವುದು) | ರಾಜ್ಯದಲ್ಲಿ 2017-18ನೇ ಸಾಲಿನಲ್ಲಿ 50 ತಾಲ್ಲೂಕುಗಳು ಹಾಗೂ ನಂತರದಲ್ಲಿ 14 ಹೊಸ ತಾಲ್ಲೂಕುಗಳನ್ನು ಘೋಷಿಸಲಾಗಿದ್ದು, ಇವುಗಳಲ್ಲಿ 60 ತಾಲ್ಲೂಕುಗಳು ಅಸ್ತಿತ್ವಕ್ಕೆ ಬಂದಿರುತ್ತವೆ. ಹೊಸದಾಗಿ ರಚನೆಯಾಗಿರುವ ತಾಲ್ಲೂಕುಗಳಲ್ಲಿ 57 ತಾಲ್ಲೂಕುಗಳಿಗೆ ತಹಸೀಲ್ದಾರ್ ಹುದ್ದೆ ಸೇರಿದಂತೆ ಅಗತ್ಯ ಸಂಖ್ಯೆಯ ಹುದ್ದೆಗಳನ್ನು ಮಂಜೂರು ಮಾಡಿ, ತಾಲ್ಲೂಕು ಕಚೇರಿಗಳನ್ನು ಪ್ರಾರಂಭಿಸಲಾಗಿದೆ. ಇನ್ನುಳಿದ 3 ತಾಲ್ಲೂಕುಗಳಲ್ಲಿ ಹುದ್ದೆಗಳನ್ನು ಮಂಜೂರು ಮಾಡುವ ಪ್ರಕ್ರಿಯೆ ಚಾಲನೆಯಲ್ಲಿದೆ.<br>ಹೊಸದಾಗಿ ರಚನೆಯಾಗಿರುವ 60 ತಾಲ್ಲೂಕುಗಳಲ್ಲಿ 57 ತಾಲ್ಲೂಕುಗಳಲ್ಲಿ ತಾಲ್ಲೂಕು ಪಂಚಾಯತಿಗಳು ಪುನರ್ ನಿರ್ಮಾಣವಾಗಿದ್ದು, ಇನ್ನುಳಿದ ತಾಲ್ಲೂಕುಗಳಲ್ಲಿ ಪುನರ್ ನಿರ್ಮಾಣ ಮಾಡುವ ಪ್ರಕ್ರಿಯೆ ಚಾಲನೆಯಲ್ಲಿದೆ. |
| ಆ) | ಹೊಸ ತಾಲ್ಲೂಕಿನಲ್ಲಿ ಇರಬೇಕಾದ ಎಲ್ಲಾ ಇಲಾಖೆಗಳ ಕಛೇರಿಗಳನ್ನು ತಾಲ್ಲೂಕು ಕೇಂದ್ರಗಳಲ್ಲಿ ಕಾರ್ಯಾರಂಭ ಮಾಡಲಾಗಿದೆಯೇ; ಹಾಗೂ ಈ ತಾಲ್ಲೂಕು ಕಛೇರಿಗಳು ಕಾರ್ಯಾರಂಭವಾಗಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ನೂತನ 60 ತಾಲ್ಲೂಕುಗಳಲ್ಲಿ 57 ತಾಲ್ಲೂಕುಗಳಲ್ಲಿ ಕಂದಾಯ ಇಲಾಖೆ ವತಿಯಿಂದ ತಹಸೀಲ್ದಾರ್ ಕಚೇರಿಗಳನ್ನು ಪ್ರಾರಂಭಿಸಲಾಗಿದೆ. ಇನ್ನುಳಿದ ಇಲಾಖೆಗಳ ತಾಲ್ಲೂಕು ಮಟ್ಟದ ಕಚೇರಿಗಳು ಪೂರ್ಣ ಪ್ರಮಾಣದಲ್ಲಿ ಪ್ರಾರಂಭವಾಗಿಲ್ಲದ ಕಾರಣ ಹೊಸ ತಾಲ್ಲೂಕುಗಳಲ್ಲಿ ವಿವಿಧ ಇಲಾಖೆಗಳ ತಾಲ್ಲೂಕು ಮಟ್ಟದ ಕಚೇರಿಗಳನ್ನು ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಹಂತ-ಹಂತವಾಗಿ ಪ್ರಾರಂಭಿಸಲು ಎಲ್ಲಾ ಇಲಾಖೆಗಳ ಅಪರ ಮುಖ್ಯ / ಪ್ರಧಾನ ಕಾರ್ಯದರ್ಶಿಗಳಿಗೆ ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಮೂಲಕ ಸೂಕ್ತ ನಿರ್ದೇಶನ ನೀಡಲಾಗಿದೆ. |
| ಇ) | ಈ ಹೊಸ ತಾಲ್ಲೂಕಿನ ಮೂಲಭೂತ ಸೌಕರ್ಯಗಳನ್ನು ಒದಗಿಸದಿದ್ದಲ್ಲಿ ಯಾವಾಗ ಸದರಿ ಸೌಕರ್ಯಗಳನ್ನು ಒದಗಿಸಲಾಗುವುದು; | ರಾಜ್ಯದಲ್ಲಿ ಹೊಸದಾಗಿ ರಚನೆಯಾದ ತಾಲ್ಲೂಕುಗಳ ಪೈಕಿ ಯಲಹಂಕ ತಾಲ್ಲೂಕಿನಲ್ಲಿ ಮಿನಿ ವಿಧಾನಸೌಧ ನಿರ್ಮಿಸಲಾಗಿದೆ. ಮೂಡಬಿದರೆ, ಕಡಬ, ಬ್ರಹ್ಮಾವರ, ದಾಂಡೇಲಿ, ಹೆಬ್ರಿ, ಕಾಪು, ಬೈಂದೂರು, ಕೆ.ಜಿ.ಎಫ್, ಕುರುಗೋಡು, ಕಂಪ್ಲಿ, ಬಬಲೇಶ್ವರ ಮತ್ತು ತಿಕೋಟ ತಾಲ್ಲೂಕುಗಳಲ್ಲಿ ಎಲ್ಲಾ ಮೂಲಭೂತ ಸೌಕರ್ಯಗಳನ್ನು ಒಳಗೊಂಡಂತೆ ಮಿನಿ ವಿಧಾನಸೌಧ ಕಟ್ಟಡ ನಿರ್ಮಾಣಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಪ್ರಸ್ತುತ ಕಟ್ಟಡ ಕಾಮಗಾರಿಗಳು ಪ್ರಗತಿಯಲ್ಲಿವೆ. |

| | | |
|---|---|---|
| | | ಉಳಿದಂತೆ , ಸಾಲಿಗ್ರಾಮ, ಮೂಲ್ಕಿ, ನಿಡಗುಂದಿ, ಕೋಲ್ಹಾರ, ಕಳಸ, ನ್ಯಾಮತಿ, ಗಜೇಂದ್ರಗಡ, ಲಕ್ಷ್ಮೇಶ್ವರ ಅಜ್ಜಂಪುರ, ಮೂಡಲಗಿ ಮತ್ತು ಹನೂರು ತಾಲ್ಲೂಕುಗಳಲ್ಲಿ ಹೊಸ ಮಿನಿ ವಿಧಾನಸೌಧ ಕಟ್ಟಡ ನಿರ್ಮಿಸಲು ಸ್ಥಳ ಗುರುತಿಸಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದು, ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಪರಿಶೀಲನೆಯಲ್ಲಿವೆ.<br>ಇನ್ನುಳಿದ ತಾಲ್ಲೂಕುಗಳಲ್ಲಿ ಹೊಸದಾಗಿ ಮಿನಿ ವಿಧಾನಸೌಧ ನಿರ್ಮಿಸಲು ಜಾಗ ಗುರುತಿಸಿ ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ. |
| ಈ) | ರಾಜ್ಯದಲ್ಲಿರುವ ಹೊಸ ತಾಲ್ಲೂಕುಗಳಿಗೆ ಇಲ್ಲಿಯವರೆಗೆ ಒದಗಿಸಿರುವ ಅನುದಾನ ಎಷ್ಟು? (ಜಿಲ್ಲಾವಾರು ಮಾಹಿತಿ ನೀಡುವುದು) | ಹೊಸ ತಾಲ್ಲೂಕುಗಳು ಕಾರ್ಯಾರಂಭ ಮಾಡಲು ಹಾಗೂ ಆಡಳಿತಾತ್ಮಕ ವೆಚ್ಚಗಳನ್ನು ಭರಿಸಲು ಅನುವಾಗುವಂತೆ ಆಯವ್ಯಯದಲ್ಲಿ ಒದಗಿಸುವ ಅನುದಾನವನ್ನು ಆಧರಿಸಿ ಕಂದಾಯ ಇಲಾಖೆಯಿಂದ 2017-18 ರಿಂದ ಇದುವರೆಗೆ ಬಿಡುಗಡೆ ಮಾಡಿರುವ ಜಿಲ್ಲಾವಾರು ಅನುದಾನದ ವಿವರವನ್ನು **ಅನುಬಂಧದಲ್ಲಿ** ನೀಡಲಾಗಿದೆ. |

**ಸಂಖ್ಯೆ: ಕಂಇ 15 ಎಲ್‌ಆರ್‌ಡಿ 2022**

**(ಆರ್.ಅಶೋಕ)**
ಕಂದಾಯ ಸಚಿವರು

## 2017–18ನೇ ಸಾಲಿನಿಂದ ಇದುವರೆಗೆ ನೂತನ ತಾಲ್ಲೂಕುಗಳಿಗೆ ಬಿಡುಗಡೆಯಾಗಿರುವ ಜಿಲ್ಲಾವಾರು ಅನುದಾನದ ವಿವರ

| ವಿಭಾಗ | ಜಿಲ್ಲೆ | | ಹೊಸ ತಾಲ್ಲೂಕಿನ ಹೆಸರು | | ಅನುದಾನದ ವಿವರ ಲಕ್ಷಗಳಲ್ಲಿ |
|---|---|---|---|---|---|
| ಬೆಂಗಳೂರು | 1. | ಬೆಂಗಳೂರು ನಗರ | 1. | ಯಲಹಂಕ | 33.50 |
| | 2. | ಕೋಲಾರ | 2. | ಕೆ.ಜಿ.ಎಫ್. | 33.50 |
| | 3. | ದಾವಣಗೆರೆ | 3. | ನ್ಯಾಮತಿ | 33.50 |
| ಮೈಸೂರು | 4. | ದಕ್ಷಿಣ ಕನ್ನಡ | 4. | ಮೂಡುಬಿದರೆ | 81.50 |
| | | | 5. | ಕಡಬ | |
| | | | 6. | ಉಳ್ಳಾಲ | |
| | | | 7. | ಮುಲ್ಕಿ | |
| | 5. | ಮೈಸೂರು | 8. | ಸರಗೂರು | 39.50 |
| | | | 9. | ಸಾಲಿಗ್ರಾಮ | |
| | 6. | ಚಿಕ್ಕಮಗಳೂರು | 10. | ಅಜ್ಜಂಪುರ | 37.00 |
| | | | 11. | ಕಳಸಾ | |
| | 7. | ಚಾಮರಾಜನಗರ | 12. | ಹನೂರು | 33.50 |
| | 8. | ಉಡುಪಿ | 13. | ಬ್ರಹ್ಮಾವರ | 134.00 |
| | | | 14. | ಕಾಪು | |
| | | | 15. | ಬೈಂದೂರು | |
| | | | 16. | ಹೆಬ್ರಿ | |
| | 9. | ಕೊಡಗು | 17. | ಪೊನ್ನಂಪೇಟೆ | 7.00 |
| | | | 18. | ಕುಶಾಲನಗರ | |
| ಬೆಳಗಾವಿ | 10. | ಬೆಳಗಾವಿ | 19. | ನಿಪ್ಪಾಣಿ | 100.50 |
| | | | 20. | ಮೂಡಲಗಿ | |
| | | | 21. | ಕಾಗವಾಡ | |
| | 11. | ಬಾಗಲಕೋಟೆ | 22. | ಗುಳೇದಗುಡ್ಡ | 100.50 |
| | | | 23. | ರಬಕವಿ – ಬನಹಟ್ಟಿ | |
| | | | 24. | ಇಳಕಲ್ | |
| | 12. | ಧಾರವಾಡ | 25. | ಅಣ್ಣಿಗೇರಿ | 100.50 |
| | | | 26. | ಅಳ್ನಾವರ | |
| | | | 27. | ಹುಬ್ಬಳ್ಳಿ ನಗರ | |
| | 13. | ಗದಗ | 28. | ಗಜೇಂದ್ರಗಡ | 67.00 |
| | | | 29. | ಲಕ್ಷ್ಮೇಶ್ವರ | |
| | 14. | ಹಾವೇರಿ | 30. | ರಟ್ಟಿಹಳ್ಳಿ | 33.50 |
| | 15. | ಉತ್ತರ ಕನ್ನಡ | 31. | ದಾಂಡೇಲಿ | 33.50 |
| | 16. | ವಿಜಯಪುರ | 32. | ಬಬಲೇಶ್ವರ | 243.00 |
| | | | 33. | ನಿಡಗುಂದಿ | |
| | | | 34. | ತಿಕೋಟ | |
| | | | 35. | ದೇವರಹಿಪ್ಪರಗಿ | |
| | | | 36. | ತಾಳಿಕೋಟೆ | |
| | | | 37. | ಚಡಚಣ | |
| | | | 38. | ಕೊಲ್ಹಾರ | |
| | | | 39. | ಆಲಮೇಲ | |

| | | | | | |
|---|---|---|---|---|---|
| ಕಲಬುರಗಿ | 17. | ಬೀದರ್ | 40. | ಚಿಟಗುಪ್ಪ | 100.50 |
| | | | 41. | ಹುಲಸೂರು | |
| | | | 42. | ಕಮಲಾನಗರ | |
| | 18. | ಬಳ್ಳಾರಿ | 43. | ಕುರುಗೋಡು | 100.50 |
| | | | 44. | ಕೊಟ್ಟೂರು | |
| | | | 45. | ಕಂಪ್ಲಿ | |
| | 19. | ಕಲಬುರಗಿ | 46. | ಕಾಳಗಿ | 134.00 |
| | | | 47. | ಕಮಲಾಪೂರ | |
| | | | 48. | ಯಡ್ರಾಮಿ | |
| | | | 49. | ಶಹಾಬಾದ್ | |
| | 20. | ಯಾದಗಿರಿ | 50. | ಹುಣಸಗಿ | 100.50 |
| | | | 51. | ವಡಗೇರ | |
| | | | 52. | ಗುರುಮಿಟ್ಕಲ್ | |
| | 21. | ಕೊಪ್ಪಳ | 53. | ಕುಕನೂರು | 100.50 |
| | | | 54. | ಕನಕಗಿರಿ | |
| | | | 55. | ಕಾರಟಗಿ | |
| | 22. | ರಾಯಚೂರು | 56. | ಮಸ್ಕಿ | 67.00 |
| | | | 57. | ಸಿರವಾರ | |